**ಪ್ರಸ್ತಾವನೆ :**

ಮೇಲೆ ಓದಲಾದ (1)ರಲ್ಲಿರುವ ಸರ್ಕಾರದ ಆದೇಶದಲ್ಲಿ ರಾಜ್ಯದ ಸಕ್ಕರೆ ಕಾರ್ಖಾನೆಗಳು 2007–08ನೇ ಸಾಲಿನ ಹಂಗಾಮಿನಲ್ಲಿ ದಿನಾಂಕ 31–3–2008ರ ಅಂತ್ಯಕ್ಕೆ 12 ತಿಂಗಳು ಮೀರಿ ಪಕ್ವವಾದ ಎಲ್ಲಾ ಕಬ್ಬನ್ನು ನುರಿಸಬೇಕೆಂಬ ಹಿನ್ನೆಲೆಯಲ್ಲಿ ಸಕ್ಕರೆ ಕಾರ್ಖಾನೆಗಳನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ ಕೆಲವು ವಿನಾಯಿತಿ ಮತ್ತು ಸಹಾಯಧನ ಸೌಲಭ್ಯಗಳನ್ನು ನೀಡಲಾಗುವುದೆಂದು ಆದೇಶಿಸಲಾಗಿದೆ.

ಮೇಲೆ ಓದಲಾದ (2) ಮತ್ತು (3)ರಲ್ಲಿರುವ ಆಯುಕ್ತರು ಕಬ್ಬು ಅಭಿವೃದ್ಧಿರವರ ಪತ್ರಗಳಲ್ಲಿ ಶ್ರೀ ದೂದ್‌ಗಂಗಾ ಕೃಷ್ಣ ಸಹಕಾರ ಸಕ್ಕರೆ ಕಾರ್ಖಾನೆ (ನಿ) ಚಿಕ್ಕೋಡಿ ಬೆಳಗಾಂ ಜಿಲ್ಲೆ ಮತ್ತು ದಿ: ನಂದಿ ಸಹಕಾರ ಸಕ್ಕರೆ ಕಾರ್ಖಾನೆ (ನಿ) ಬಿಜಾಪುರ ಈ ಕಾರ್ಖಾನೆಗಳು 2007–08ನೇ ಸಾಲಿನಲ್ಲಿ ವಿಸ್ತರಿಸಿದ ಅವಧಿಯಲ್ಲಿ ಕಬ್ಬು ನುರಿಸಿದ್ದು ಮತ್ತು 30 ಕಿ.ಮೀ.ಗೆ ಮೀರಿದ ದೂರದಿಂದ ಕಬ್ಬು ಸಾಗಾಣಿಕೆ ಮಾಡಿಕೊಂಡಿದ್ದು ಹಾಗೂ ಸಕ್ಕರೆಯನ್ನು ರಫ್ತು ಮಾಡಲಾಗಿದ್ದು ಈ ಸಂಬಂಧ ದಿನಾಂಕ 12–3–2008ರ ಸರ್ಕಾರದ ಆದೇಶದಂತೆ ಸಹಾಯಧನವನ್ನು ಕಾರ್ಖಾನೆಗಳಿಗೆ ಈ ಕೆಳಗಿನಂತೆ ಬಿಡುಗಡೆ ಮಾಡಲು ಸಂಬಂಧಿಸಿದ ಜಿಲ್ಲಾಧಿಕಾರಿಗಳಿಗೆ ಹಣ ಬಿಡುಗಡೆಗೆ ಶಿಫಾರಸ್ಸು ಮಾಡಿದ್ದಾರೆ.

**1) ದಿ ನಂದಿ ಸಹಕಾರ ಸಕ್ಕರೆ ಕಾರ್ಖಾನೆ (ನಿ) ಬಿಜಾಪುರ**

| | |
|---|---|
| * ದಿನಾಂಕ 1–4–2008 ರಿಂದ 31–7–2008ರವರೆಗೆ ವಿಸ್ತರಿಸಿದ ಅವಧಿಯಲ್ಲಿ ನುರಿಸಿದ ಕಬ್ಬಿಗೆ ಪ್ರತಿ ಟನ್‌ಗೆ 100/–ರೂನಂತೆ ಸಹಾಯಧನ | –1,87,22,754/–ರೂ.ಗಳು |
| * 30 ಕಿ.ಮೀ. ಗಿಂತ ಮೀರಿದ ದೂರದಿಂದ ಸಾಗಣೆ ಮಾಡಿಕೊಂಡ ಕಬ್ಬಿಗೆ ಸಾಗಾಣಿಕೆ ಸಹಾಯಧನ | –19,03,917/–ರೂ.ಗಳು |
| * ರಫ್ತು ಮಾಡಿದ ಸಕ್ಕರೆಗೆ ರಫ್ತು ಸಹಾಯಧನ ಪ್ರತಿ ಕ್ವಿಂಟಾಲ್‌ಗೆ ರೂ. 100/–ರಂತೆ ಸಹಾಯಧನ | –1,42,22,000/–ರೂಗಳು |
| **ಒಟ್ಟು** | **–3,48,48,671/–ರೂ.ಗಳು** |

**2) ಶ್ರೀ ದೂದ್‌ಗಂಗಾ ಕೃಷ್ಣಾ ಸಹಕಾರಿ ಸಕ್ಕರೆ ಕಾರ್ಖಾನೆ ಚಿಕ್ಕೋಡಿ.**

| | |
|---|---|
| * ದಿನಾಂಕ 1–4–2008ರಿಂದ 31–7–2008ರವರೆಗೆ ವಿಸ್ತರಿಸಿದ ಅವಧಿಯಲ್ಲಿ ನುರಿಸಿದ ಕಬ್ಬಿಗೆ ಪ್ರತಿ ಟನ್‌ಗೆ 100/–ರೂನಂತೆ ಸಹಾಯಧನ. | –43,10,300/–ರೂಗಳು |
| * 30 ಕಿ.ಮೀ. ಗಿಂತ ಮೀರಿದ ದೂರದಿಂದ ಸಾಗಣೆ ಮಾಡಿಕೊಂಡ ಕಬ್ಬಿಗೆ ಸಾಗಾಣಿಕೆ ಸಹಾಯಧನ | –11,17,681/–ರೂ.ಗಳು |
| * ರಫ್ತು ಮಾಡಿದ ಸಕ್ಕರೆಗೆ ರಫ್ತು ಸಹಾಯಧನ ಪ್ರತಿ ಕ್ವಿಂಟಾಲ್‌ಗೆ ರೂ.100/–ರಂತೆ | –2,62,00,000/–ರೂಗಳು |
| **ಒಟ್ಟು** | **–3,16,27,981/–ರೂಗಳು** |
| **ಒಟ್ಟು (1+2)** | **–6,64,76,652/–ರೂಗಳು** |

ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಕಾರ್ಖಾನೆಗಳು ಸರ್ಕಾರಕ್ಕೆ ನೀಡಬೇಕಾದ ಬಡ್ಡಿರಹಿತ ಸಾಲ ಮತ್ತು ಕಬ್ಬು ಖರೀದಿ ತೆರಿಗೆ ಬಾಕಿ ಉಳಿಸಿಕೊಂಡಿರುವುದರಿಂದ ನೀಡಬೇಕಾದ ಸಹಾಯಧನದಲ್ಲಿ ಹೊಂದಾಣಿಕೆ ಮಾಡಿಕೊಂಡು ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 19 ಎಸ್‌ಜಿಎಫ್ 2008 (ಭಾಗ–2(3), ಬೆಂಗಳೂರು, ದಿನಾಂಕ: 16ನೇ ಡಿಸೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ದಿ ನಂದಿ ಸಹಕಾರ ಸಕ್ಕರೆ ಕಾರ್ಖಾನೆ (ನಿ) ಬಿಜಾಪುರ ಈ ಕಾರ್ಖಾನೆಗೆ 3,48,48,671/– (ಮೂರು ಕೋಟಿ ನಲವತ್ತೆಂಟು ಲಕ್ಷದ ನಲವತ್ತೆಂಟು ಸಾವಿರದ ಆರುನೂರ ಎಪ್ಪತ್ತೊಂದು ರೂಪಾಯಿ ಮಾತ್ರ) ರೂಗಳು ಮತ್ತು ಶ್ರೀ ದೂದ್ ಗಂಗಾ ಕೃಷ್ಣಾ ಸಹಕಾರ ಸಕ್ಕರೆ ಕಾರ್ಖಾನೆ (ನಿ) ಚಿಕ್ಕೋಡಿ ಈ ಕಾರ್ಖಾನೆಗೆ 3,16,27,981/–ರೂಗಳ (ಮೂರು ಕೋಟಿ ಹದಿನಾರು ಲಕ್ಷ ಇಪ್ಪತ್ತೇಳು ಸಾವಿರದ ಒಂಬೈನೂರ ಎಂಬತ್ತೊಂದು ರೂಪಾಯಿ ಮಾತ್ರ) ಸಹಾಯಧನ ಒಟ್ಟು 6,64,76,652/– (ಆರು ಕೋಟಿ ಅರವತ್ತ ನಾಲ್ಕು ಲಕ್ಷ ಎಪ್ಪತ್ತಾರು ಸಾವಿರದ ಆರುನೂರ ಐವತ್ತೆರಡು ರೂಪಾಯಿ ಮಾತ್ರ) ರೂ.ಗಳನ್ನು ಈ ಕೆಳಗಿನಂತೆ ಬಿಡುಗಡೆಗೊಳಿಸಿದೆ.

**1) ದಿ ನಂದಿ ಸಹಕಾರ ಸಕ್ಕರೆ ಕಾರ್ಖಾನೆ (ನಿ) ಬಿಜಾಪುರ**

| | | |
|---|---|---|
| * | ದಿನಾಂಕ 1–4–2008 ರಿಂದ 31–7–2008ರವರೆಗೆ ವಿಸ್ತರಿಸಿದ ಅವಧಿಯಲ್ಲಿ ನುರಿಸಿದ ಕಬ್ಬಿಗೆ ಪ್ರತಿ ಟನ್‌ಗೆ 100/–ರೂನಂತೆ ಸಹಾಯಧನ | –1,87,22,754/–ರೂ.ಗಳು |
| * | 30 ಕಿ.ಮೀ. ಗಿಂತ ಮೀರಿದ ದೂರದಿಂದ ಸಾಗಣೆ ಮಾಡಿಕೊಂಡ ಕಬ್ಬಿಗೆ ಸಾಗಾಣಿಕೆ ಸಹಾಯಧನ | –19,03,917/–ರೂ.ಗಳು |
| * | ರಫ್ತು ಮಾಡಿದ ಸಕ್ಕರೆಗೆ ರಫ್ತು ಸಹಾಯಧನ ಪ್ರತಿ ಕ್ವಿಂಟಾಲ್‌ಗೆ ರೂ. 100/–ರಂತೆ ಸಹಾಯಧನ | –1,42,22,000/–ರೂಗಳು |
| | **ಒಟ್ಟು** | **–3,48,48,671/–ರೂ.ಗಳು** |

**2) ಶ್ರೀ ದೂದ್‌ಗಂಗಾ ಕೃಷ್ಣಾ ಸಹಕಾರಿ ಸಕ್ಕರೆ ಕಾರ್ಖಾನೆ ಚಿಕ್ಕೋಡಿ.**

| | | |
|---|---|---|
| * | ದಿನಾಂಕ 1–4–2008ರಿಂದ 31–7–2008ರವರೆಗೆ ವಿಸ್ತರಿಸಿದ ಅವಧಿಯಲ್ಲಿ ನುರಿಸಿದ ಕಬ್ಬಿಗೆ ಪ್ರತಿ ಟನ್‌ಗೆ 100/–ರೂನಂತೆ ಸಹಾಯಧನ. | –43,10,300/–ರೂಗಳು |
| * | 30 ಕಿ.ಮೀ. ಗಿಂತ ಮೀರಿದ ದೂರದಿಂದ ಸಾಗಣೆ ಮಾಡಿಕೊಂಡ ಕಬ್ಬಿಗೆ ಸಾಗಾಣಿಕೆ ಸಹಾಯಧನ | –11,17,681/–ರೂ.ಗಳು |
| * | ರಫ್ತು ಮಾಡಿದ ಸಕ್ಕರೆಗೆ ರಫ್ತು ಸಹಾಯಧನ ಪ್ರತಿ ಕ್ವಿಂಟಾಲ್‌ಗೆ ರೂ.100/0ರಂತೆ | –2,62,00,000/–ರೂಗಳು |
| | **ಒಟ್ಟು** | **–3,16,27,981/–ರೂಗಳು** |
| | **ಒಟ್ಟು (1+2)** | **–6,64,76,652/–ರೂಗಳು** |

2008–09ನೇ ಸಾಲಿನ ಪರಿಷ್ಕೃತ ಆಯವ್ಯಯದಲ್ಲಿ ಈ ಉದ್ದೇಶಕ್ಕಾಗಿ ಲೆಕ್ಕ ಶೀರ್ಷಿಕೆ 2852–08–201–0–07 (ಯೋಜನೆ) 106 ಸಹಾಯಧನ ಇದರಡಿಯಲ್ಲಿ ಒದಗಿಸಲಾದ 50.00 ಕೋಟಿ ರೂಗಳಲ್ಲಿ ಸದರಿ ಹಣವನ್ನು ಬಿಡುಗಡೆಗೆ ಮಂಜೂರು ಮಾಡಲಾಗಿದೆ.

ದಿ ನಂದಿ ಸಹಕಾರ ಸಕ್ಕರೆ ಕಾರ್ಖಾನೆಯು ಬಡ್ಡಿ ರಹಿತ ಸಾಲವನ್ನಾಗಿ ಪರಿವರ್ತಿಸಿಕೊಂಡಿದ್ದ ಕಬ್ಬು ಖರೀದಿ ತೆರಿಗೆಯನ್ನು ಸರ್ಕಾರಕ್ಕೆ ಬಾಕಿ ಉಳಿಸಿಕೊಂಡಿದ್ದು ಕಾರ್ಖಾನೆಗೆ ಮಂಜೂರು ಮಾಡಲಾದ ಸಹಾಯಧನದಲ್ಲಿ 3,29,44,754/– ರೂಗಳನ್ನು ಬಡ್ಡಿ ರಹಿತ ಸಾಲದ ಬಾಕಿಗೆ ಹೊಂದಾಣಿಕೆ ಮಾಡಿಕೊಂಡು ಬಾಕಿ ಉಳಿದ ಸಾಗಾಣಿಕೆ ಸಹಾಯಧನ 19,03,917/– ರೂಗಳನ್ನು ಮಾತ್ರ ಜಿಲ್ಲಾಧಿಕಾರಿ ಬಿಜಾಪುರರವರಿಗೆ ನಗದಾಗಿ ಬಿಡುಗಡೆ ಮಾಡಲಾಗಿದೆ. ಪುಸ್ತಕ ಹೊಂದಾಣಿಕೆಯ ಮೊತ್ತ 3,29,44,754/– ರೂಗಳನ್ನು ಲೆಕ್ಕ ಶೀರ್ಷಿಕೆ 2852–08–201–0–07ಗೆ ವೆಚ್ಚ ಹಾಕಿ ಲೆಕ್ಕಶೀರ್ಷಿಕೆ 6860–04–190–1–16ಗೆ ಜಮೆ ತೋರಿಸಿ 2008–09ನೇ ಸಾಲಿನ ಲೆಕ್ಕಗಳಲ್ಲಿ ಮಹಾಲೇಖಪಾಲರು (ಹಕ್ಕು ಮತ್ತು ರಹದಾರಿ) ಲೆಕ್ಕ ಹೊಂದಾಣಿಕೆಯನ್ನು ಮಾಡುವರು.

ಶ್ರೀ ದೂದ್‌ಗಂಗಾ ಕೃಷ್ಣಾ ಸಹಕಾರ ಸಕ್ಕರೆ ಕಾರ್ಖಾನೆಯು ಸರ್ಕಾರಕ್ಕೆ 2006–07ನೇ ಸಾಲಿನ ಕಬ್ಬು ಖರೀದಿ ತೆರಿಗೆ ಬಾಕಿ ಉಳಿಸಿಕೊಂಡಿದ್ದು ಮಂಜೂರು ಮಾಡಲಾದ ಸಹಾಯಧನದಲ್ಲಿ 1,00,00,000/– ರೂಗಳನ್ನು ಕಬ್ಬು ಖರೀದಿ ತೆರಿಗೆ ಬಾಕಿಗೆ ಹೊಂದಾಣಿಕೆ ಮಾಡಿಕೊಂಡು ಬಾಕಿ ಉಳಿದಂತೆ ಸಾಗಾಣಿಕೆ ಸಹಾಯಧನ 11,17,681/– ರೂ ಮತ್ತು ರಫ್ತು ಸಹಾಯಧನ 2,05,10,300/– ರೂಗಳು ಸೇರಿ ಒಟ್ಟು 2,16,27,981/– ರೂಗಳನ್ನು ಜಿಲ್ಲಾಧಿಕಾರಿ ಬೆಳಗಾಂರವರಿಗೆ ನಗದಾಗಿ ಬಿಡುಗಡೆ ಮಾಡಲಾಗಿದೆ. ಪುಸ್ತಕ ಹೊಂದಾಣಿಕೆಯ ಮೊತ್ತ 1,00,00,000/– ರೂಗಳನ್ನು ಲೆಕ್ಕ ಶೀರ್ಷಿಕೆ 2852–08–201–0–07ಗೆ ವೆಚ್ಚ ಹಾಕಿ ಲೆಕ್ಕಶೀರ್ಷಿಕೆ 0040–00–110–1–04ಗೆ ಜಮೆ ತೋರಿಸಿ 2008–09ನೇ ಸಾಲಿನ ಲೆಕ್ಕಗಳಲ್ಲಿ ಮಹಾಲೇಖಪಾಲರು (ಹಕ್ಕು ಮತ್ತು ರಹದಾರಿ) ಲೆಕ್ಕ ಹೊಂದಾಣಿಕೆಯನ್ನು ಮಾಡುವರು.

ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರುರವರು ನಗದಾಗಿ ಬಿಡುಗಡೆಗೊಳಿಸಲಾದ ಸಹಾಯಧನವನ್ನು ಸರ್ಕಾರದ ಆದೇಶ ದಿನಾಂಕ:12–3–2008ರಲ್ಲಿ ವಿಧಿಸಲಾಗಿರುವ ನಿಬಂಧನೆ ಮತ್ತು ಮಾರ್ಗಸೂಚಿಗಳನ್ವಯ ಪರಿಶೀಲಿಸಿ ಜಿಲ್ಲಾಧಿಕಾರಿ ಬೆಳಗಾಂ ಮತ್ತು ಜಿಲ್ಲಾಧಿಕಾರಿ ಬಿಜಾಪುರ ರವರ ಮೂಲಕ ಕಾರ್ಖಾನೆಗಳಿಗೆ ಮತ್ತು ರೈತರಿಗೆ ಬಿಡುಗಡೆ ಮಾಡಲು ಕ್ರಮ ವಹಿಸತಕ್ಕದ್ದು. ಕಾರ್ಖಾನೆಗಳು ರೈತರಿಗೆ ಕಬ್ಬು ಖರೀದಿ ಬಾಕಿ ಉಳಿಸಿಕೊಂಡಿದ್ದಲ್ಲಿ, ರೈತರಿಗೆ ಆದ್ಯತೆ ಮೇರೆಗೆ ಬಿಡುಗಡೆ ಮಾಡಲು ಕ್ರಮವಹಿಸತಕ್ಕದ್ದು. ವಿತರಿಸಲಾದ ಹಣದ ವಿವರವನ್ನು ಆಯುಕ್ತರು ಕಬ್ಬು ಅಭಿವೃದ್ಧಿರವರು ಜಿಲ್ಲಾಧಿಕಾರಿಗಳಿಂದ ಪಡೆದು ಸರ್ಕಾರಕ್ಕೆ ವರದಿ ಮಾಡುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 1338 ವೆಚ್ಚ–1/2008, ದಿನಾಂಕ 4–11–2008 ಮತ್ತು ಎಫ್‌ಡಿ 1560 ವೆಚ್ಚ–1/08, ದಿನಾಂಕ 6–12–2008ರಲ್ಲಿ ನೀಡಲಾದ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1693

**ಪಿ. ಆನಂದ್‌ಕುಮಾರ್**
ಪೀಠಾಧಿಕಾರಿ (ಸಕ್ಕರೆ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**ವಿಷಯ :** ಬಳ್ಳಾರಿ ರೇಷ್ಮೆಗೂಡಿನ ಮಾರುಕಟ್ಟೆ ಕಟ್ಟಡವನ್ನು ಬಳ್ಳಾರಿ ಇಂಟಿಗ್ರೇಟೆಡ್ ರೂರಲ್ ಡೆವಲಪ್‌ಮೆಂಟ್ ಸೊಸೈಟಿ, ಬಳ್ಳಾರಿ ರವರಿಗೆ ಬಾಡಿಗೆ ಆಧಾರದ ಮೇಲೆ ನೀಡುವ ಕುರಿತು.

**ಓದಲಾಗಿದೆ:** ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು ಇವರ ಪತ್ರ ಸಂಖ್ಯೆ: ರೇನಿ/ಗೂಮಾ/ಬಳ್ಳಾರಿ/ಕಟ್ಟಡ/34/2005–06, ದಿನಾಂಕ 30–6–2008.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಬಳ್ಳಾರಿಯ ರೇಷ್ಮೆಗೂಡು ಮಾರುಕಟ್ಟೆ ಕಟ್ಟಡವನ್ನು ವಿಶ್ವಬ್ಯಾಂಕಿನ ನೆರವಿನ ಯೋಜನೆಯಡಿಯಲ್ಲಿ ನಿರ್ಮಿಸಲಾಗಿದ್ದು, ಬಳ್ಳಾರಿ ಜಿಲ್ಲೆಯಲ್ಲಿ ನಿರೀಕ್ಷಿಸಿದ ಪ್ರಮಾಣದಲ್ಲಿ ರೇಷ್ಮೆ ನೂಲು ಬಿಚ್ಚಾಣಿಕೆ ಚಟುವಟಿಕೆಯು ಅಭಿವೃದ್ಧಿಯಾಗದ ಕಾರಣ ಈ ಮಾರುಕಟ್ಟೆಯ ಕಟ್ಟಡದಲ್ಲಿ ನಿರ್ಮಾಣ ಮಾಡಿದ ದಿನದಿಂದಲೇ ಕಾರ್ಯನಿರ್ವಹಿಸುತ್ತಿಲ್ಲವೆಂದು ಈಗಲೂ ಈ ಜಿಲ್ಲೆಯಲ್ಲಿ ನೂಲು ಬಿಚ್ಚಾಣಿಕೆ ಚಟುವಟಿಕೆಯು ಅಭಿವೃದ್ಧಿ ಆಗಿರುವುದಿಲ್ಲವಾದ್ದರಿಂದ ಸದರಿ ಕಟ್ಟಡವನ್ನು ಕರ್ನಾಟಕ ರಾಜ್ಯ ಉಗ್ರಾಣ ನಿಗಮಕ್ಕೆ ಮಾಸಿಕ ರೂ. 5600/– ಬಾಡಿಗೆ ಆಧಾರದ ಮೇಲೆ ವಹಿಸಿಕೊಡಲಾಗಿತ್ತು. ದಿನಾಂಕ 7–9–2007 ರಿಂದ ಸದರಿಯವರು ಕಟ್ಟಡವನ್ನು ತೆರವುಗೊಳಿಸಿರುತ್ತಾರೆ. ಬಳ್ಳಾರಿಯ ಇಂಟಿಗ್ರೇಟೆಡ್ ರೂರಲ್ ಡೆವಲಪ್‌ಮೆಂಟ್ ಸೊಸೈಟಿಯವರು ತಮ್ಮ ಸಂಸ್ಥೆಯು ಸಮಾಜ ಸೇವಾ ಸುಧಾರಣೆಯಲ್ಲಿ ತೊಡಗಿದ್ದು, ಮಹಿಳೆಯರು, ಮಕ್ಕಳು ಮತ್ತು ದುರ್ಬಲ ವರ್ಗದವರ ಏಳಿಗೆಗಾಗಿ ಶ್ರಮಿಸುತ್ತಿದ್ದು, ಸಮಾಜ ಸುಧಾರಣಾ ಸೇವೆಯಲ್ಲಿ ತೊಡಗಿರುವ ತಮ್ಮ ಸಂಸ್ಥೆಗೆ ರೇಷ್ಮೆ ಗೂಡಿನ ಮಾರುಕಟ್ಟೆಯನ್ನು ಈ ಹಿಂದೆ ಕರ್ನಾಟಕ ಉಗ್ರಾಣ ನಿಗಮಕ್ಕೆ ನೀಡಿದ ರೀತಿಯಲ್ಲಿಯೇ ಮಾಹೆಯಾನ ರೂ. 5600/– ಬಾಡಿಗೆಯಂತೆ ಕನಿಷ್ಟ 15–20 ವರ್ಷಗಳವರೆಗೆ ಸಂಸ್ಥೆಯ ಕಾರ್ಯಚಟುವಟಿಕೆಗಳನ್ನು ನಡೆಸಲು ಕಟ್ಟಡವನ್ನು ಬಾಡಿಗೆಗೆ ನೀಡಲು ಕೋರಿರುವುದಾಗಿ ತಿಳಿಸಿ, ಲೋಕೋಪಯೋಗಿ ಇಲಾಖೆ ನಿಗದಿಪಡಿಸುವ ನ್ಯಾಯಯುತವಾದ ಬಾಡಿಗೆ ಆಧಾರದ ಮೇಲೆ ಸದರಿ ಕಟ್ಟಡವನ್ನು ಸರ್ಕಾರಿ ಪತ್ರ ಸಂಖ್ಯೆ: ವಾಕೈ 27 ರೇಯೋವಿ 2007, ದಿನಾಂಕ 24–5–2008 ರಲ್ಲಿ ಸೂಚಿಸಿರುವ ಷರತ್ತು, ನಿಯಮಗಳನ್ವಯ ತಾತ್ಕಾಲಿಕವಾಗಿ ನೀಡಲು ಸರ್ಕಾರದ ಆದೇಶ ಕೋರಿರುತ್ತಾರೆ.

ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರ ಮೇಲಿನ ಪ್ರಸ್ತಾವನೆಯ ಕುರಿತಂತೆ ಪರಿಶೀಲಿಸಲಾಗಿದ್ದು, ಕಟ್ಟಡವನ್ನು ಇಲಾಖೆಯು ಉಪಯೋಗಿಸದೇ ಇರುವುದರಿಂದ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಪ್ರಸ್ತಾವಿಸಿರುವಂತೆ ಲೋಕೋಪಯೋಗಿ ಇಲಾಖೆಯು ನಿಗದಿಪಡಿಸಿದ ಬಾಡಿಗೆ ದರದನ್ವಯ ಸರ್ಕಾರಿ ರೇಷ್ಮೆಗೂಡಿನ ಮಾರುಕಟ್ಟೆ ಕಟ್ಟಡವನ್ನು ಬಾಡಿಗೆಗೆ ನೀಡಲು ತೀರ್ಮಾನಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ ರೇಯೋವಿ 2008, ಬೆಂಗಳೂರು, ದಿನಾಂಕ: 28ನೇ ಜುಲೈ 2008.**

ಬಳ್ಳಾರಿ ರೇಷ್ಮೆಗೂಡಿನ ಮಾರುಕಟ್ಟಡ ಕಟ್ಟಡವನ್ನು ಬಳ್ಳಾರಿ ಇಂಟಿಗ್ರೇಟೆಡ್ ರೂರಲ್ ಡೆವಲಪ್‌ಮೆಂಟ್ ಸೊಸೈಟಿ, ಬಳ್ಳಾರಿ ಇವರಿಗೆ ಲೋಕೋಪಯೋಗಿ ಇಲಾಖೆಯು ನಿಗದಿಪಡಿಸುವ ಬಾಡಿಗೆ ಆಧಾರದ ಮೇಲೆ ಸರ್ಕಾರಿ ಪತ್ರ ಸಂಖ್ಯೆ ವಾಕೈ 27 ರೇಯೋವಿ 2007, ದಿನಾಂಕ 24–5–2008ರಲ್ಲಿ ಸೂಚಿಸಿರುವ ಮಾರ್ಗಸೂಚಿ, ಕರಾರು ಒಪ್ಪಂದ ಷರತ್ತು ಮತ್ತು ನಿಬಂಧನೆಗಳನ್ವಯ ತಾತ್ಕಾಲಿಕವಾಗಿ ಬಾಡಿಗೆಗೆ ನೀಡಲು ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1123

**ಭಾರತಿ ಆರ್. ನಾಯಕ್**
ಪೀಠಾಧಿಕಾರಿ (ರೇಷ್ಮೆ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ :** ತುಮಕೂರು ನಗರದ ಉಪ್ಪಾರಹಳ್ಳಿ ರೈಲ್ವೆ ಗೇಟ್ ಬಳಿ ಲೆವೆಲ್ ಕ್ರಾಸಿಂಗ್ 40 ಮತ್ತು 41ರಲ್ಲಿ ರೈಲ್ವೆ ಮೇಲುಸೇತುವೆಯ ಕೂಡು ರಸ್ತೆ ನಿರ್ಮಿಸುವ ಕಾಮಗಾರಿಗೆ ಭೂಸ್ವಾಧೀನ ಪರಿಹಾರ ಮತ್ತು ನಾಗರೀಕ ಸೌಲಭ್ಯಗಳ ಸ್ಥಳಾಂತರದ ಪರಿಹಾರದ ಹಣ ಬಿಡುಗಡೆ ಬಗ್ಗೆ.

**ಓದಲಾಗಿದೆ:**
1. ದಿನಾಂಕ 27–7–07 ಸಂ. IDD 65 NSW 07 ರ ಸರ್ಕಾರಿ ಆದೇಶ.
2. ದಿನಾಂಕ 16–8–07ರ IDD 65 NSW 07 ರ ಸರ್ಕಾರಿ ಆದೇಶ ಪತ್ರ.
3. ದಿನಾಂಕ 3–12–08 ಸಂ. 352/CN/BNC/TK/RoB, ಮುಖ್ಯ ಇಂಜಿನಿಯರ್, ನೈರುತ್ಯ ರೈಲ್ವೆ, ಬೆಂಗಳೂರು ಇವರ ಪತ್ರ.
4. ದಿನಾಂಕ 5–12–08 ಸಂ. ಸಂಕದ/ಸೇಶಾಬೆಂ/ಆರ್.ಯು.ಬಿ/ರಾಮನಗರ/ಎಲ್.ಸಿ.40–41/08–09ರ ಮುಖ್ಯ ಇಂಜಿನಿಯರ್ ಸಂಪರ್ಕ ಮತ್ತು ಕಟ್ಟಡ, ಲೋಕೋಪಯೋಗಿ ಇಲಾಖೆ (ದ) ಬೆಂಗಳೂರು ರವರ ಪತ್ರ.

**ಪ್ರಸ್ತಾವನೆ :**

ತುಮಕೂರು ನಗರದ ಉಪ್ಪಾರಹಳ್ಳಿ ರೈಲ್ವೆ ಗೇಟ್ ಬಳಿಕ ಎಲ್.ಸಿ. ಸಂ. 40–41ರ ಬದಲಿಗೆ ರಸ್ತೆ ಮೇಲುಸೇತುವೆಗೆ ಕೂಡು ರಸ್ತೆ ನಿರ್ಮಿಸುವ ಕಾಮಗಾರಿಗೆ ಭೂಸ್ವಾಧೀನ ಪರಿಹಾರ ಮತ್ತು ನಾಗರೀಕ ಸೌಲಭ್ಯಗಳ ಸ್ಥಳಾಂತರಕ್ಕೆ ರಾಜ್ಯ ಸರ್ಕಾರದ ಪಾಲು ರೂ. 342.00 ಲಕ್ಷಗಳನ್ನು ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಬಿಡುಗಡೆ ಮಾಡಲಾಗಿತ್ತು.

2. ರೈಲ್ವೆ ಇಲಾಖೆಯು ಸದರಿ ಕೂಡುರಸ್ತೆಯ ಅಂದಾಜು ವೆಚ್ಚದಲ್ಲಿನ ತನ್ನ ಪಾಲಿನ ಶೇ. 50ರಷ್ಟು ಮೊತ್ತವನ್ನು ಲೋಕೋಪಯೋಗಿ ಇಲಾಖೆಗೆ ನೀಡಬೇಕೆಂದು ಮೇಲೆ ಓದಲಾದ (2)ರ ಸರ್ಕಾರಿ ಪತ್ರದಲ್ಲಿ ತಿಳಿಸಲಾಗಿತ್ತು. ಆದರೆ ಈ ಕಾಮಗಾರಿಗೆ ಬೇಕಾಗುವ ಭೂಸ್ವಾಧೀನದ ವೆಚ್ಚವನ್ನು ರೈಲ್ವೆ ಇಲಾಖೆಯು ನೀಡಲು ಸಾಧ್ಯವಿಲ್ಲವೆಂದು, ಏಕೆಂದರೆ ಭಾರತೀಯ ರೈಲ್ವೆ ಇಂಜಿನಿಯರಿಂಗ್ ಕೋಡ್‌ನಲ್ಲಿ ಇದಕ್ಕೆ ಅವಕಾಶವಿಲ್ಲದ ಕಾರಣ ಈ ಕೂಡು ರಸ್ತೆಯ ಕಾಮಗಾರಿಗೆ ಬೇಕಾಗುವ ಭೂಸ್ವಾಧೀನ ಹಾಗೂ ನಾಗರೀಕ ಸೌಲಭ್ಯಗಳ ಸ್ಥಳಾಂತರಕ್ಕೆ ತಗಲುವ ಸಂಪೂರ್ಣ ವೆಚ್ಚವನ್ನು ರಾಜ್ಯ ಸರ್ಕಾರವೇ ಭರಿಸಬೇಕೆಂದು ರೈಲ್ವೆ ಇಲಾಖೆಯ ಮುಖ್ಯ ಇಂಜಿನಿಯರ್‌ರವರ ಮೇಲೆ ಓದಲಾದ (3)ರ ಪತ್ರದಲ್ಲಿ ತಿಳಿಸಿರುತ್ತಾರೆ.

ರೈಲ್ವೆ ಇಲಾಖೆಯ ಮುಖ್ಯ ಇಂಜಿನಿಯರವರು ತಿಳಿಸಿರುವಂತೆ ಸದರಿ ಕಾಮಗಾರಿಗೆ ಬೇಕಾಗುವ ಭೂಸ್ವಾಧೀನ ಹಾಗೂ ನಾಗರೀಕ ಸೌಲಭ್ಯಗಳ ಸ್ಥಳಾಂತರಕ್ಕೆ ತಗಲುವ ಪರಿಹಾರದ ಸಂಪೂರ್ಣ ಮೊತ್ತವನ್ನು ರಾಜ್ಯ ಸರ್ಕಾರವೇ ಭರಿಸಬೇಕೆಂದು ರೈಲ್ವೆ ಇಲಾಖೆಯು ತಿಳಿಸಿರುವುದರಿಂದ ಪರಿಹಾರ ಧನ ಪಾವತಿಸಲು ಬಾಕಿ ಮೊತ್ತ ರೂ. 349.10 ಲಕ್ಷಗಳನ್ನು ಬಿಡುಗಡೆ ಮಾಡಬೇಕೆಂದು ಮುಖ್ಯ ಇಂಜಿನಿಯರ್, ಲೋಕೋಪಯೋಗಿ ಇಲಾಖೆ (ದಕ್ಷಿಣ) ಇವರು ಮೇಲೆ ಓದಲಾದ (4)ರ ಪತ್ರದಲ್ಲಿ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಮರುಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಮೂಅಇ 65 ರಾರಾಹೆ 2007, ಬೆಂಗಳೂರು, ದಿನಾಂಕ: 15ನೇ ಡಿಸೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ತುಮಕೂರು ನಗರದ ಉಪ್ಪಾರಹಳ್ಳಿ ರೈಲ್ವೆ ಗೇಟ್ ಬಳಿಯಿರುವ ಎಲ್.ಸಿ. ಸಂ. 40–41ರ ಬದಲಿಗೆ ರಸ್ತೆ ಮೇಲು ಸೇತುವೆಗೆ ಕೂಡು ರಸ್ತೆಯ ನಿರ್ಮಿಸುವ ಕಾಮಗಾರಿಗೆ ಬೇಕಾಗಿರುವ ಭೂಸ್ವಾಧೀನ ಪರಿಹಾರ ಮತ್ತು ನಾಗರೀಕ ಸೌಲಭ್ಯಗಳ ಸ್ಥಳಾಂತರದ ಪರಿಹಾರ ಧನ ರೂ. 349.10 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ.

ಈ ಮೊತ್ತವನ್ನು ಲೆಕ್ಕ ಶೀರ್ಷಿಕೆ "5465–01–190–3–04–(ಯೋಜನೆ)–211 ಬಂಡವಾಳ" ಇದರ ಅಡಿಯಲ್ಲಿ 2008–09ನೇ ಸಾಲಿನ ಆಯವ್ಯಯದಲ್ಲಿ ಒದಗಣೆ ಮಾಡಿರುವ ರೂ. 30.00 ಕೋಟಿಗಳ ಮೊತ್ತದಿಂದ ಭರಿಸತಕ್ಕದ್ದು.

2. ಈ ಮೊತ್ತವನ್ನು ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಇಲಾಖೆ, ತುಮಕೂರು ವಿಭಾಗ ತುಮಕೂರು ಇವರು ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಸರ್ಕಾರದ ಅಧೀನ ಕಾರ್ಯದರ್ಶಿಯವರ ಮೇಲು ರುಜುವಿನೊಂದಿಗೆ ಪೇಯಿಸ್ ರಸೀತಿಯ ಮೂಲಕ ಡ್ರಾಮಾಡಿ ರಸ್ತೆ ಮೇಲುಸೇತುವೆಯ ಕೂಡುರಸ್ತೆ ನಿರ್ಮಾಣದ ಕಾಮಗಾರಿಗೆ ಭೂಸ್ವಾಧೀನ ಮತ್ತು ನಾಗರೀಕ ಸೌಲಭ್ಯಗಳ ಸ್ಥಳಾಂತರದ ಧನ ಪರಿಹಾರ ವೆಚ್ಚಕ್ಕೆ ಭರಿಸತಕ್ಕದ್ದು.

3. ಈ ಆದೇಶವನ್ನು ಇಲಾಖಾ ಪ್ರಧಾನ ಕಾರ್ಯದರ್ಶಿಗಳಿಗೆ ನೀಡಿರುವ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1691

**ಎನ್. ಮಂಜುಳಗೀತ**

ಸರ್ಕಾರದ ಅಧೀನ ಕಾರ್ಯದರ್ಶಿ,

ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ

## ಕರ್ನಾಟಕ ಸರ್ಕಾರದ ಸಚಿವಾಲಯ

## ಸುತ್ತೋಲೆ

**ಸಂಖ್ಯೆ ಡಿಪಿಎಆರ್ 221 ಎಸ್ಎಂಇ 2008, ಬೆಂಗಳೂರು ದಿನಾಂಕ**

**ವಿಷಯ :** ಅಧಿಕೃತ ವಿದೇಶ ಪ್ರಯಾಣಕ್ಕೆ ಸಂಬಂಧಿಸಿದ ಪ್ರಸ್ತಾವನೆಗಳನ್ನು ಸಲ್ಲಿಸುವ ಬಗ್ಗೆ ಮಾರ್ಗಸೂಚನೆಗಳು.

**ಉಲ್ಲೇಖ :** 1. ಸುತ್ತೋಲೆ ಸಂಖ್ಯೆ: ಸಿಆಸುಇ 171 ಎಸ್ಎಂಇ 2003, ದಿನಾಂಕ 14–1–2004.

2. ಸುತ್ತೋಲೆ ಸಂಖ್ಯೆ: ಸಿಆಸುಇ 345 ಎಸ್ಎಂಇ 2003, ದಿನಾಂಕ 1–6–2004.

3. ಸುತ್ತೋಲೆ ಸಂಖ್ಯೆ: ಸಿಆಸುಇ 390 ಎಸ್ಎಂಇ 2006, ದಿನಾಂಕ 25–11–2006.

**ಪ್ರಸ್ತಾವನೆ :**

ವಿವಿಧ ಉದ್ದೇಶಗಳಿಗಾಗಿ ಅಧಿಕೃತ ವಿದೇಶ ಪ್ರಯಾಣ ಮಾಡುವ ಸಂಬಂಧದಲ್ಲಿ ಪ್ರಸ್ತಾವನೆಯನ್ನು ಸಲ್ಲಿಸುವ ಬಗ್ಗೆ ಉಲ್ಲೇಖಿತ ಸುತ್ತೋಲೆಗಳಿಗೆ ಗಮನಸೆಳೆದಿದೆ. ಈ ವಿಷಯದಲ್ಲಿ ಈ ಕೆಳಕಂಡಂತೆ ಮುಂದುವರೆದ ಸೂಚನೆಗಳನ್ನು ನೀಡಲಾಗಿದೆ.

2) ಅಧಿಕೃತ ವಿದೇಶ ಪ್ರಯಾಣದ ಪ್ರಸ್ತಾವನೆ: ಅಧಿಕೃತ ವಿದೇಶ ಪ್ರಯಾಣದ ಪ್ರಸ್ತಾವನೆಗಳಿಗೆ ಕೇಂದ್ರ ಸರ್ಕಾರದ ಅನುಮೋದನೆ/ಅನುಮತಿ ಅಗತ್ಯ. ಈ ವಿಷಯವನ್ನು ಕೇಂದ್ರ ಸರ್ಕಾರದಲ್ಲಿ ವಿತ್ತ ಮಂತ್ರಾಲಯವು ವ್ಯವಹರಿಸುತ್ತದೆ. ವಿತ್ತ ಮಂತ್ರಾಲಯವು ಈ ಸಂಬಂಧದ ಪ್ರಸ್ತಾವನೆಗಳನ್ನು ವ್ಯವಹರಿಸುವಾಗ ಸಂಬಂಧಿಸಿದ ಆಡಳಿತಾತ್ಮಕ ಮಂತ್ರಾಲಯವಲ್ಲದೆ ಅಗತ್ಯಾನುಸಾರ ವಿದೇಶಾಂಗ ವ್ಯವಹಾರ ಮಂತ್ರಾಲಯ, ಗೃಹ ಮಂತ್ರಾಲಯ ಮತ್ತು ವಿತ್ತ ಮಂತ್ರಾಲಯದ ಬಂಡವಾಳ ಬ್ಯಾಂಕ್ ಶಾಖೆಯನ್ನು ಸಮಾಲೋಚಿಸುತ್ತದೆ. ಗಣ್ಯಾತಿಗಣ್ಯರ ಅಧಿಕೃತ ವಿದೇಶ ಪ್ರಯಾಣ ಸಂಬಂಧದಲ್ಲಿ ವಿದೇಶಾಂಗ ಮಂತ್ರಾಲಯದ ಸಮಾಲೋಚನೆ ಅಗತ್ಯವಾಗುತ್ತದೆ. ಆ ಇಲಾಖೆಯಿಂದ ರಾಜಕೀಯಾತ್ಮಕವಾಗಿ ಪ್ರಸ್ತಾವನೆಯನ್ನು ಪರಿಶೀಲಿಸಿ ಅನುಮೋದನೆಯನ್ನು ಪಡೆಯಬೇಕಾಗುತ್ತದೆ. ವಿದೇಶ ಪ್ರಯಾಣ ಸಂಬಂಧದಲ್ಲಿ ಸಾರಿಗೆ, ವಸತಿ ವೆಚ್ಚ ಮತ್ತು ವಿದೇಶಿ ಆತಿಥ್ಯವನ್ನು ಸ್ವೀಕರಿಸುವ ಪ್ರಸ್ತಾವನೆಯಿದ್ದಲ್ಲಿ, ವಿದೇಶಿ ಆತಿಥ್ಯವನ್ನು ಪಡೆದುಕೊಳ್ಳಲು ಅನುಮತಿಸುವ ಬಗ್ಗೆ ಗೃಹಮಂತ್ರಾಲಯದ ಸಮಾಲೋಚನೆ ಅಗತ್ಯವಾಗುತ್ತದೆ. ಹಾಗೆಯೇ World Bank/IMF ಮುಂತಾದ ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ

ಹಣಕಾಸು ಸಂಸ್ಥೆಗಳು ವೆಚ್ಚವನ್ನು ಭರಿಸುವುದಿದ್ದಲ್ಲಿ ಈ ಬಗ್ಗೆ ವಿತ್ತ ಮಂತ್ರಾಲಯವು ಫಂಡ್ ಬ್ಯಾಂಕ್ ಡಿವಿಜನ್ ಸಮಾಲೋಚನೆ ಪಡೆಯಬೇಕಾಗುತ್ತದೆ. ಈ ರೀತಿಯ ಆಡಳಿತಾತ್ಮಕವಾಗಿ ಪ್ರಸ್ತಾವನೆಗಳನ್ನು ಪರಿಶೀಲಿಸಿ ಸಂಬಂಧಿಸಿದ ಆಡಳಿತಾತ್ಮಕ/ಸಮಾಲೋಚನಾ ಇಲಾಖೆಗಳಿಂದ ಸಮಾಲೋಚನೆ ಪಡೆದು ಅನುಮತಿ/ಅನುಮೋದನೆ ನೀಡಲು ಕೇಂದ್ರ ಸರ್ಕಾರಕ್ಕೆ ಕನಿಷ್ಠ 4 ವಾರಗಳ ಕಾಲಾವಕಾಶ ಬೇಕಾಗುತ್ತದೆ.

3. ರಾಜ್ಯ ಸರ್ಕಾರದಲ್ಲಿ ಪ್ರಸ್ತಾವನೆಗಳ ಪರಿಶೀಲನೆ: ಅಧಿಕೃತ ವಿದೇಶಕ್ಕೆ ಪ್ರಯಾಣಕ್ಕೆ ಸಂಬಂಧಿಸಿದ ಪ್ರಸ್ತಾವನೆಗಳನ್ನು ಪರಿಶೀಲಿಸಲು ಸರ್ಕಾರದ ಮುಖ್ಯ ಕಾರ್ಯದರ್ಶಿಗಳ ನೇತೃತ್ವದಲ್ಲಿ ಒಂದು ಪರಾಮರ್ಶಕ ಸಮಿತಿಯನ್ನು ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 376 ಎಸ್‌ಎಂಇ 2006ರಲ್ಲಿ ರಚಿಸಲಾಗಿದೆ. ಈ ಸಮಿತಿಯು ಇಂತಹ ಪ್ರಸ್ತಾವನೆಗಳನ್ನು ಪ್ರಸ್ತಾವನೆಯ ಉದ್ದೇಶ ಮತ್ತು ಅಗತ್ಯತೆಯ ಹಿನ್ನೆಲೆಯಲ್ಲಿ ಪರಿಶೀಲಿಸುತ್ತದೆ ಹಾಗೂ ಮಾನ್ಯ ಮುಖ್ಯಮಂತ್ರಿಗಳ ಅನುಮೋದನೆಯೊಂದಿಗೆ ಇಂತಹ ಪ್ರಸ್ತಾವನೆಗಳಿಗೆ ಸರ್ಕಾರದ ಅನುಮೋದನೆ/ಅನುಮತಿಯನ್ನು ನೀಡಲಾಗುತ್ತದೆ ಹಾಗೂ ಈ ಬಗ್ಗೆ ಕೇಂದ್ರ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸೂಕ್ತ ಶಿಫಾರಸ್ಸಿನೊಂದಿಗೆ ಅನುಮತಿಗಾಗಿ ಕಳುಹಿಸುತ್ತದೆ. ಇಂತಹ ಪ್ರಸ್ತಾವನೆಗಳನ್ನು ಪರಾಮರ್ಶಕ ಸಮಿತಿಯ ಮುಂದೆ ತಂದು ಸದರಿ ಸಮಿತಿಯ ಶಿಫಾರಸ್ಸನ್ನು ಮಾನ್ಯ ಮುಖ್ಯಮಂತ್ರಿಗಳ ಅನುಮೋದನೆಯೊಂದಿಗೆ ಕೇಂದ್ರ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಲು ರಾಜ್ಯ ಸರ್ಕಾರಕ್ಕೆ ಕನಿಷ್ಠ 2 ವಾರಗಳ ಕಾಲಾವಕಾಶ ಅಗತ್ಯವಿರುತ್ತದೆ.

4. ಅಧಿಕೃತ ವಿದೇಶ ಪ್ರಯಾಣಕ್ಕೆ ಸಂಬಂಧಿಸಿದ ಯಾವುದೇ ಪ್ರಸ್ತಾವನೆಯನ್ನು ಸಂಬಂಧಿಸಿದ ಸಚಿವಾಲಯ ಆಡಳಿತ ಇಲಾಖೆಯು ಖಾತೆ ಹೊಂದಿದ ಮಂತ್ರಿಯವರ ಅನುಮೋದನೆಯೊಂದಿಗೆ ಕಡತವನ್ನು ಸಿಆಸುಇ (ಸೇವೆಗಳು) ವಿಭಾಗಕ್ಕೆ ಕಳುಹಿಸತಕ್ಕದ್ದು. ಒಂದು ವೇಳೆ, ಮುಖ್ಯಮಂತ್ರಿಗಳು ಖಾತೆ ಹೊಂದಿರುವ ಮಂತ್ರಿಯಾಗಿದ್ದಲ್ಲಿ ಪ್ರಸ್ತಾವನೆಯನ್ನು ಸಂಬಂಧಿಸಿದ ಆಡಳಿತ ಇಲಾಖೆಯ ಕಾರ್ಯದರ್ಶಿ ನೇರವಾಗಿ ಪ್ರಸ್ತಾವನೆಯನ್ನು ಸಿ.ಆ.ಸು.ಇ. ಗೆ ಕಳುಹಿಸತಕ್ಕದ್ದು. ಈ ಪ್ರಸ್ತಾವನೆಯನ್ನು ಪರಾಮರ್ಶಕ ಸಮಿತಿಯ ಮುಂದೆ ತಂದು ಸದರಿ ಸಮಿತಿಯ ಶಿಫಾರಸ್ಸಿನೊಂದಿಗೆ ಕಡತವನ್ನು ಮಾನ್ಯ ಮುಖ್ಯಮಂತ್ರಿಗಳಿಗೆ ಸಲ್ಲಿಸಿ ಖಾತೆ ಹೊಂದಿದ ಮಂತ್ರಿಯ ಅಧಿಕಾರ ಹಾಗೂ ಮುಖ್ಯಮಂತ್ರಿಯ ಅಧಿಕಾರ ಸೇರಿದಂತೆ ಒಟ್ಟಿಗೆ ಅನುಮೋದನೆಯನ್ನು ಪಡೆದುಕೊಳ್ಳಲಾಗುವುದು.

5. ಇಂತಹ ಪ್ರಸ್ತಾವನೆಗಳನ್ನು ಸಲ್ಲಿಸುವಾಗ ಈ ಕೆಳಕಂಡ ಅಂಶಗಳನ್ನು ತಪ್ಪದೇ ಪರಿಗಣಿಸಿ ಮಾಹಿತಿ ಒದಗಿಸತಕ್ಕದ್ದು.

ಅ) ಒಂದು ನಿಯೋಗದ ಅಂಗವಾಗಿ ಅಖಿಲ ಭಾರತ ಸೇವೆಯ ಅಧಿಕಾರಿಗಳು ಮಾನ್ಯ ಮಂತ್ರಿಗಳು ಮತ್ತು ಇಲಾಖೆಯ ಅಧಿಕಾರಿಗಳೊಂದಿಗೆ ವಿದೇಶ ಪ್ರಯಾಣ ಮಾಡುವಾಗ ಪೂರ್ಣ ನಿಯೋಗದ ಸಂಪೂರ್ಣ ಮಾಹಿತಿಯನ್ನು ಒದಗಿಸತಕ್ಕದ್ದು.

ಆ) ಸಂಬಂಧಿಸಿದ ವಿದೇಶ ಪ್ರಯಾಣದ ಉದ್ದೇಶ ಹಾಗೂ ಈ ಪ್ರಯಾಣದ ಪರಿಣಾಮವಾಗಿ ಸರ್ಕಾರಕ್ಕೆ, ಅಧಿಕಾರಿಗೆ ಆಗುವ ಅನುಕೂಲ ಹಾಗೂ ಉದ್ದೇಶಿತ ಪ್ರಯಾಣದ ಅನುಭವದ ಬಳಕೆಯಿಂದ ರಾಜ್ಯ ಸರ್ಕಾರಕ್ಕೆ ಸಿಗುವ ಪ್ರತಿಫಲಗಳ ವಿವರಣೆ.

ಇ) ತರಬೇತಿ ಸಂಬಂಧದಲ್ಲಿ ವಿದೇಶ ಪ್ರಯಾಣ ಪ್ರಸ್ತಾವನೆಯಿದ್ದರೆ ಅಂತಹ ತರಬೇತಿಯು ದೇಶದೊಳಗೆ ಲಭ್ಯವಿಲ್ಲದಿರುವ ಬಗ್ಗೆ ದೃಢೀಕರಣ.

6. ಈ ರೀತಿ ವಿದೇಶ ಪ್ರಯಾಣದ ಪ್ರಸ್ತಾವನೆಗಳನ್ನು ಕಳುಹಿಸುವಾಗ ಆಡಳಿತಾತ್ಮಕ ಹಿತದೃಷ್ಟಿಯಿಂದ ಒಂದೇ ಉದ್ದೇಶಕ್ಕೆ ಸಂಬಂಧಿಸಿದ ಪ್ರಸ್ತಾವನೆಯಲ್ಲಿ ಆ ಇಲಾಖೆಯ ಮುಖ್ಯಸ್ಥರು ಮತ್ತು ಸಂಬಂಧಿಸಿದ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಯವರು ಇಬ್ಬರೂ ಒಟ್ಟಿಗೆ ಪ್ರಯಾಣಿಸುವ ಸಂಬಂಧದ ಪ್ರಸ್ತಾವನೆಯನ್ನು ಕಳುಹಿಸುವಂತಿಲ್ಲ. ಈ ಅಂಶವನ್ನು ಗಮನದಲ್ಲಿರಿಸಿಕೊಂಡು ವಿದೇಶ ಪ್ರಯಾಣದ ಪ್ರಸ್ತಾವನೆಗಳನ್ನು ಸಲ್ಲಿಸಬೇಕೆಂದು ನಿರ್ದೇಶಿಸಲಾಗಿದೆ.

7. ಮೇಲಿನ ವಿವರಣೆಯಿಂದ, ಅಧಿಕೃತ ವಿದೇಶ ಪ್ರಯಾಣದ ಯಾವುದೇ ಪ್ರಸ್ತಾವನೆಯನ್ನು ನಿಗದಿತ ಪದ್ಧತಿಯನ್ನು ಅನುಸರಿಸಿ ಮತ್ತು ಸರಿಯಾಗಿ ವ್ಯವಹರಿಸಿ ತೀರುವಳಿ ಮಾಡಲು ರಾಜ್ಯ ಸರ್ಕಾರಕ್ಕೆ ಕನಿಷ್ಠ 06 ವಾರಗಳ ಕಾಲಾವಕಾಶ

ಬೇಕಾಗುತ್ತದೆ ಎಂಬುದು ಸ್ಪಷ್ಟವಾಗುತ್ತದೆ. ಆದ್ದರಿಂದ, ಇನ್ನು ಮುಂದೆ ಅಧಿಕೃತ ವಿದೇಶ ಪ್ರಯಾಣದ ಯಾವುದೇ ಪ್ರಸ್ತಾವನೆಯನ್ನು, ಈ ವೇಳಾಪಟ್ಟಿಯನ್ನು ಗಮನದಲ್ಲಿರಿಸಿಕೊಂಡು ಸಲ್ಲಿಸಬೇಕಾಗುವುದು ಅಗತ್ಯವಾಗುತ್ತದೆ.

ಮೇಲಿನ ಮಾರ್ಗಸೂಚನೆಗಳನ್ನು ಕಟ್ಟುನಿಟ್ಟಾಗಿ ಪಾಲಿಸಬೇಕೆಂದು ಸೂಚಿಸಲಾಗಿದೆ.

**ಸುಧಾಕರ್ ರಾವ್**

ಪಿ.ಆರ್.1692 ಸರ್ಕಾರದ ಮುಖ್ಯ ಕಾರ್ಯದರ್ಶಿ,

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** 2008–09ನೇ ಸಾಲಿಗೆ ಡಿಆರ್‌ಡಿಎ ಆಡಳಿತ ಯೋಜನೆಯ ರಾಜ್ಯದ ಪಾಲಿನ ಒಂದನೇ ಕಂತಿನ ಉಳಿಕೆ ಅನುದಾನವನ್ನು ರಾಜ್ಯದ ಎಲ್ಲಾ 29 ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ: ಆರ್–20015:28:2007–ಡಿಆರ್‌ಡಿಎ (ಎಸ್‌ಆರ್ ನಂ. 10) ದಿನಾಂಕ 3–4–2008.
2. ಸರ್ಕಾರದ ಆದೇಶ ಸಂ. ಗ್ರಾಅಪ.7. ಎಸ್‌ಜೆವೈ (ಡಿಆರ್‌ಡಿಎ) 2008, ಬೆಂಗಳೂರು ದಿನಾಂಕ 23–5–2008.
3. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ: ಆರ್–20015:28:2007–ಡಿಆರ್‌ಡಿಎ (ಎಸ್‌ಆರ್ ನಂ.40) ದಿನಾಂಕ 28–5–2008.

**ಪ್ರಸ್ತಾವನೆ :**

ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಮೇಲೆ ಓದಲಾದ ಪತ್ರ (1) ಹಾಗೂ ಆದೇಶ (2)ರಲ್ಲಿ ಡಿಆರ್‌ಡಿಎ ಆಡಳಿತ ಯೋಜನೆಯಡಿ 2008–09ನೇ ಸಾಲಿಗೆ ಒಂದನೇ ಕಂತಿನ ಭಾಗಶಃ ಅನುದಾನವಾಗಿ ರೂ. 1,58,46,000/– ಹಾಗೂ ರೂ. 52,82,000/–ಗಳನ್ನು ರಾಜ್ಯದ 29 ಜಿಲ್ಲಾ ಪಂಚಾಯತಿಗಳಿಗೆ ಅನುಕ್ರಮವಾಗಿ ಬಿಡುಗಡೆ ಮಾಡಿವೆ. ಕೇಂದ್ರ ಸರ್ಕಾರವು ಓದಲಾಗಿದೆ (3)ರಲ್ಲಿ ರಾಜ್ಯದ 29 ಜಿಲ್ಲಾ ಪಂಚಾಯತಿಗಳಿಗೆ ಒಂದನೇ ಕಂತಿನ ಉಳಿಕೆ ಅನುದಾನ ರೂ. 3,80,31,000/–ಗಳನ್ನು ಬಿಡುಗಡೆ ಮಾಡಿದೆ. ಇದಕ್ಕನುಗುಣವಾಗಿ ರಾಜ್ಯದ ಪಾಲಿನ ಅನುದಾನ ರೂ. 1,26,75,000/– ಬಿಡುಗಡೆ ಮಾಡಬೇಕಾಗಿದೆ. ಆದುದರಿಂದ, ಈ ಕೆಳಗಿನ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 7 ಎಸ್‌ಜೆವೈ (ಡಿಆರ್‌ಡಿಎ) 2008, ಬೆಂಗಳೂರು, ದಿನಾಂಕ: 26ನೇ ಜೂನ್ 2008.**

2008–09ನೇ ಸಾಲಿನಲ್ಲಿ ಕೇಂದ್ರ ಸರ್ಕಾರವು ಡಿಆರ್‌ಡಿಎ ಆಡಳಿತ ಯೋಜನೆಯಡಿ ಬಿಡುಗಡೆ ಮಾಡಿರುವ ಮೊದಲನೇ ಕಂತಿನ ಉಳಿಕೆ ಅನುದಾನಕ್ಕೆ ಅನುಗುಣವಾಗಿ ರಾಜ್ಯ ಸರ್ಕಾರ ರೂ. 1,26,75,000/– (ಒಂದು ಕೋಟಿ ಇಪ್ಪತ್ತಾರು ಲಕ್ಷ ಎಪ್ಪತ್ತೈದು ಸಾವಿರ ರೂಪಾಯಿಗಳು ಮಾತ್ರ) ಅನ್ನು ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಂತೆ ರಾಜ್ಯದ 29 ಜಿಲ್ಲಾ ಪಂಚಾಯತಿಗಳಿಗೆ ಕೆಳಕಾಣಿಸಿದ ಷರತ್ತುಗಳಿಗೆ ಒಳಪಟ್ಟು ಅನುದಾನವನ್ನು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

ಡಿಆರ್‌ಡಿಎ ಆಡಳಿತ ಯೋಜನೆಯ ಕೈಪಿಡಿಯ ಮಾರ್ಗಸೂಚಿಯಂತೆ ಈ ಆದೇಶದಲ್ಲಿ ಬಿಡುಗಡೆ ಮಾಡಿದ ಪಂಚಾಯತಿಗಳ ಅನುದಾನವನ್ನು ಜಿಲ್ಲಾ ಪಂಚಾಯತಿಗಳ ಸಿಬ್ಬಂದಿಗಳ ವೇತನ ಹಾಗೂ ಸಾದಿಲ್ವಾರು ವೆಚ್ಚಗಳಿಗೆ ಮಾತ್ರ ಉಪಯೋಗಿಸುವುದು. ಇನ್ನಾವುದೇ ಉದ್ದೇಶಗಳಿಗೆ ಉಪಯೋಗಿಸತಕ್ಕದ್ದಲ್ಲ.

ಅನುದಾನದ ಮಾದರಿಯು ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ನಡುವೆ 75:25ರ ಅನುಪಾತದಲ್ಲಿರುತ್ತದೆ.

ಯೋಜನೆಯ ವೆಚ್ಚವನ್ನು ಲೆಕ್ಕಶೀರ್ಷಿಕೆ "2515 ಇತರೆ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು 00–196–ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ–6–ಜಿಲ್ಲಾ ಪಂಚಾಯತ್–06–ಡಿಆರ್‌ಡಿಎ ಆಡಳಿತಾತ್ಮಕ ವೆಚ್ಚ–(ಕೇಂದ್ರ ಪುರಸ್ಕೃತ ಯೋಜನೆ) 2008–2009 (2515–00–196–6–06)"ರಡಿ ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 7 ಜೆಡ್‌ಪಿಎ 2003, ದಿನಾಂಕ 14–7–2005 ಮತ್ತು ತಿದ್ದುಪಡಿ ಆದೇಶ ಸಂಖ್ಯೆ: ಎಫ್‌ಡಿ 1 ಜೆಡ್‌ಪಿಎ 2007 (ಪಿ2) ದಿನಾಂಕ 26–4–2007ರನ್ವಯ ಜಿಲ್ಲಾ ಪಂಚಾಯತ್ ನಿಧಿ 1ಕ್ಕೆ ಜಮೆ ಮಾಡಿಕೊಂಡು ಭರಿಸತಕ್ಕದ್ದು.

ಈ ಆದೇಶದಲ್ಲಿ ಬಿಡುಗಡೆ ಮಾಡಿರುವ ಅನುದಾನದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

ಆಯಾಯ ಜಿಲ್ಲಾ ಪಂಚಾಯತ್‌ಗೆ ಬಿಡುಗಡೆ ಮಾಡಿರುವ ಅನುದಾನವನ್ನು ಟ್ರೆಜರಿಯಿಂದ ಸೆಳೆಯುವ ಅಧಿಕಾರವನ್ನು ಆಯಾಯ ಜಿಲ್ಲಾ ಪಂಚಾಯತಿಯ ಮುಖ್ಯ ಲೆಕ್ಕಾಧಿಕಾರಿಗೆ ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ.

2008–09ನೇ ಸಾಲಿನ ಅನುಮೋದಿತ ವಾರ್ಷಿಕ ಯೋಜನೆಯನ್ನು ಜಿಲ್ಲಾ ಪಂಚಾಯತಿಯ ಸಂಬಂಧಿಸಿದ ಉಪ ಕಾರ್ಯದರ್ಶಿ (ಆಡಳಿತ) ಇವರು ಸರ್ಕಾರಕ್ಕೆ ಸಲ್ಲಿಸುವುದು.

ಎಲ್ಲಾ ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳು ಆಯಾ ತಿಂಗಳ ಪ್ರಗತಿ ವರದಿ ಹಾಗೂ ಹುದ್ದೆವಾರು ವಿವರಗಳನ್ನು ಮುಂದಿನ ತಿಂಗಳ 5ನೇ ತಾರೀಖಿನೊಳಗೆ ನಿರ್ದೇಶಕರು (ಸ್ವಉಕಾ) ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬಹುಮಹಡಿ ಕಟ್ಟಡ, ಕರ್ನಾಟಕ ಸರ್ಕಾರ ಇವರಿಗೆ ತಪ್ಪದೇ ಕಳುಹಿಸುವುದು.

ಎಲ್ಲಾ ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಲೆಕ್ಕ ಪರಿಶೋಧನ ವರದಿಗಳನ್ನು, ನಿರ್ದೇಶಕರು (ಸ್ವಉಕಾ) ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬಹುಮಹಡಿ ಕಟ್ಟಡ, ಕರ್ನಾಟಕ ಸರ್ಕಾರ ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಕರ್ನಾಟಕ ಸರ್ಕಾರ ಇವರ ಸಹಮತಿ ಸಂಖ್ಯೆ: ಗ್ರಾಅಪ:295:ಪಿಬಿಎಸ್.2008, ದಿನಾಂಕ 23–6–2008ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಕೆ. ರಾಜು**

ನಿರ್ದೇಶಕರು (ಸ್ವ.ಉ.ಕಾ)

ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

**ಸರ್ಕಾರದ ಆದೇಶದ ಸಂಖ್ಯೆ: ಗ್ರಾಅಪ 7 ಎಸ್‌ಜಿವೈ (ಡಿಆರ್‌ಡಿಎ) 2008, ಬೆಂಗಳೂರು**
**ದಿನಾಂಕ 26ನೇ ಜೂನ್ 2008**
**ಅನುಬಂಧ**

(ರೂ.ಗಳಲ್ಲಿ)

| ಕ್ರಮ ಸಂಖ್ಯೆ | ಜಿಲ್ಲಾ ಪಂಚಾಯತಿ | ಜಿ.ಪಂ. ಕೋಡ್ | ಡಿ.ಡಿ.ಓ. ಕೋಡ್ | ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಮೊದಲನೇ ಕಂತಿನ ಉಳಿಕೆ ಅನುದಾನ | ರಾಜ್ಯ ಸರ್ಕಾರವು ಬಿಡುಗಡೆ ಮಾಡಿರುವ ಮೊದಲನೇ ಕಂತಿನ ಉಳಿಕೆ ಅನುದಾನ |
|---|---|---|---|---|---|
| 1 | ಬಾಗಲಕೋಟೆ | 461 | 2900zz0001 | 14,38,000 | 4,79,000 |
| 2 | ಬೆಂಗಳೂರು (ಗ್ರಾ) | 402 | 0300zz8001 | 11,61,000 | 3,87,000 |
| 3 | ಬೆಂಗಳೂರು ನಗರ | 401 | 0100zz8001 | 11,61,000 | 3,87,000 |
| 4 | ಬೆಳಗಾವಿ | 413 | 2200zz0002 | 14,38,000 | 4,79,000 |
| 5 | ಬಳ್ಳಾರಿ | 418 | 3400zz0001 | 14,38,000 | 4,79,000 |
| 6 | ಬೀದರ್ | 419 | 3800zz5701 | 11,61,000 | 3,87,000 |
| 7 | ಬಿಜಾಪುರ | 414 | 2800zz9152 | 11,61,000 | 3,87,000 |
| 8 | ಚಾಮರಾಜನಗರ | 456 | 1000zz0001 | 11,61,000 | 3,87,000 |
| 9 | ಚಿಕ್ಕಮಗಳೂರು | 408 | 1800zz0017 | 14,38,000 | 4,79,000 |

| ಕ್ರಮ ಸಂಖ್ಯೆ | ಜಿಲ್ಲಾ ಪಂಚಾಯತಿ | ಜಿ.ಪಂ. ಕೋಡ್ | ಡಿ.ಡಿ.ಓ. ಕೋಡ್ | ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಮೊದಲನೇ ಕಂತಿನ ಉಳಿಕೆ ಅನುದಾನ | ರಾಜ್ಯ ಸರ್ಕಾರವು ಬಿಡುಗಡೆ ಮಾಡಿರುವ ಮೊದಲನೇ ಕಂತಿನ ಉಳಿಕೆ ಅನುದಾನ |
|---|---|---|---|---|---|
| 10 | ಚಿಕ್ಕಬಳ್ಳಾಪುರ | 453 | 0600zz0001 | 14,39,000 | 4,79,000 |
| 11 | ಚಿತ್ರದುರ್ಗ | 403 | 1600zz0001 | 14,38,000 | 4,79,000 |
| 12 | ದಕ್ಷಿಣ ಕನ್ನಡ | 409 | 1900zz0047 | 11,61,000 | 3,87,000 |
| 13 | ದಾವಣಗೆರೆ | 451 | 1700zz0002 | 14,38,000 | 4,79,000 |
| 14 | ಧಾರವಾಡ | 415 | 2500zz8798 | 11,61,000 | 3,87,000 |
| 15 | ಗದಗ್ | 462 | 2600zz0001 | 11,61,000 | 3,87,000 |
| 16 | ಗುಲ್ಬರ್ಗಾ | 417 | 3200zz0003 | 14,38,000 | 4,79,000 |
| 17 | ಹಾಸನ | 410 | 1300zz0003 | 14,38,000 | 4,79,000 |
| 18 | ಹಾವೇರಿ | 463 | 2700zz0001 | 14,38,000 | 4,79,000 |
| 19 | ಕೊಡಗು | 411 | 1200zz0001 | 11,61,000 | 3,87,000 |
| 20 | ಕೋಲಾರ | 404 | 0700zz8002 | 11,61,000 | 3,87,000 |
| 21 | ಕೊಪ್ಪಳ | 466 | 1500zz0010 | 11,61,000 | 3,87,000 |
| 22 | ಮಂಡ್ಯ | 412 | 1100zz0001 | 14,39,000 | 4,80,000 |
| 23 | ಮೈಸೂರು | 407 | 0900zz0001 | 14,39,000 | 4,80,000 |
| 24 | ರಾಯಚೂರು | 420 | 3600zz0001 | 11,61,000 | 3,87,000 |
| 25 | ರಾಮನಗರ | 452 | 0400zz0001 | 11,60,000 | 3,87,000 |
| 26 | ಶಿವಮೊಗ್ಗ | 405 | 1400zz0002 | 14,39,000 | 4,80,000 |
| 27 | ತುಮಕೂರು | 406 | 0800zz0001 | 14,39,000 | 4,80,000 |
| 28 | ಉಡುಪಿ | 457 | 2000zz0001 | 11,61,000 | 3,87,000 |
| 29 | ಉತ್ತರ ಕನ್ನಡ | 416 | 3000zz0080 | 16,41,000 | 5,47,000 |
| | **ಒಟ್ಟು** | | | **3,80,31,000** | **1,26,75,000** |

**ಆರ್.ಕೆ. ರಾಜು**

ಪಿ.ಆರ್.1030

ನಿರ್ದೇಶಕರು (ಸ್ವ.ಉ.ಕಾ)
ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ :** ಶ್ರೀಮತಿ ಮಂಜುಳ, ಬೆಂಗಳೂರು, ಇವರನ್ನು ಕನ್ನಡ ಅಭಿವೃದ್ಧಿ ಪ್ರಾಧಿಕಾರದಲ್ಲಿನ ಬೆರಳಚ್ಚುಗಾರರ ಹುದ್ದೆಗೆ ಗುತ್ತಿಗೆ ಆಧಾರದ ಮೇಲೆ ನೇಮಿಸುವ ಬಗ್ಗೆ.

**ಓದಲಾಗಿದೆ:** ಕಾರ್ಯದರ್ಶಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಇವರ ಪತ್ರ ಸಂಖ್ಯೆ: ಕಅಪ್ರಾ/ಕಾ/1/2008–09, ದಿನಾಂಕ 1–8–2008.

**ಪ್ರಸ್ತಾವನೆ :**

ಮೇಲೆ ಓದಲಾದ ಕಾರ್ಯದರ್ಶಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು, ಇವರ ದಿನಾಂಕ 1–8–08ರ ಪತ್ರದಲ್ಲಿ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಕಾರ್ಯದರ್ಶಿಯವರ ಕಚೇರಿಯಲ್ಲಿ ಬೆರಳಚ್ಚುಗಾರರ ಹುದ್ದೆಯು ಖಾಲಿಯಿರುತ್ತದೆಂದು, 2008–09ನೇ ಸಾಲಿಗೆ ಸರ್ಕಾರವು ರೂ. 400.00 ಲಕ್ಷಗಳ ಅನುದಾನವನ್ನು ಒದಗಿಸಲಾಗಿದ್ದು, ಸಕಾಲದಲ್ಲಿ ಕಾರ್ಯಕ್ರಮಗಳನ್ನು ಮುಗಿಸಲು ಸಿಬ್ಬಂದಿಯ ಅವಶ್ಯಕತೆಯಿದ್ದು, ನಿಯೋಜನೆ ನೇಮಕಾತಿಗಾಗಿ ಸಿಬ್ಬಂದಿ ವರ್ಗದವರೂ ಲಭ್ಯವಾಗುತ್ತಿಲ್ಲವಾದ್ದರಿಂದ ಕರ್ನಾಟಕ ನಾಗರೀಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 15(1)ಬಿ(ii) ಪ್ರಕಾರ ಶ್ರೀಮತಿ ಮಂಜುಳ ಕೆ.ಜಿ. ಬೆಂಗಳೂರು, ಇವರನನು ಬೆರಳಚ್ಚುಗಾರರ ಹುದ್ದೆಗೆ ಗುತ್ತಿಗೆ ಆಧಾರದ ಮೇಲೆ ನೇಮಕಾತಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸಿರುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 41 ಕೆಎಎಲ್ 2008, ಬೆಂಗಳೂರು, ದಿನಾಂಕ: 12ನೇ ನವೆಂಬರ್ 2008.**

ಶ್ರೀಮತಿ ಮಂಜುಳ ಕೆ.ಜಿ., ನಂ.1 3ನೇ ಅಡ್ಡರಸ್ತೆ, ಜಿ.ಕೆ.ಡಬ್ಲ್ಯೂ, ಲೇಔಟ್, ವಿಜಯನಗರ, ಬೆಂಗಳೂರು–560 040, ಇವರನ್ನು ಕಾರ್ಯದರ್ಶಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಕಚೇರಿಯಲ್ಲಿ ಖಾಲಿ ಇರುವ ಬೆರಳಚ್ಚುಗಾರರ ಹುದ್ದೆಗೆ ಕರ್ನಾಟಕ ನಾಗರೀಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 15(1)ಬಿ(ii) ರನ್ವಯ ದಿನಾಂಕ 4–8–2008 ರಿಂದ ಒಂದು ವರ್ಷದ ಅವಧಿಯವರೆಗೆ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಗುತ್ತಿಗೆ ಆಧಾರದ ಮೇಲೆ ನೇಮಕಾತಿ ಮಾಡಿಕೊಳ್ಳಲು ಸರ್ಕಾರವು ಅನುಮೋದಿಸಿರುತ್ತದೆ.

ಈ ನೇಮಕಾತಿಗೆ ಸಂಬಂಧಪಟ್ಟ ಷರತ್ತು ಹಾಗೂ ನಿಬಂಧನೆಗಳನ್ನು ನಂತರ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1592

**ಎಂ.ಕೆ. ಧರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

(ಆಡಳಿತ ಕನ್ನಡ)

## ವಸತಿ ಸಚಿವಾಲಯ

**ವಿಷಯ :** ನಿರ್ಮಲಜ್ಯೋತಿ ಯೋಜನೆಯಡಿಯಲ್ಲಿ ಭದ್ರಾವತಿ ನಗರದ ಕೊಳಚೆ ಪ್ರದೇಶಗಳಲ್ಲಿ ಉನ್ನತೀಕರಣ ಮತ್ತು ಅಭಿವೃದ್ಧಿಪಡಿಸುವ ಕಾಮಗಾರಿಗಳಲ್ಲಿ ವರ್ಕ್‌ಸ್ಲಿಪ್‌ಗ್ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಮತ್ತು ತಿದ್ದುಪಡಿ ಸಂಖ್ಯೆ ವಇ 23 ಕೊಮಂಲೆ 04, ದಿನಾಂಕ 19–10–2006.
2. ಆಯುಕ್ತರು, ಕಕೊನಿಮ, ಬೆಂಗಳೂರು ಇವರ ಪತ್ರ ಸಂಖ್ಯೆ: ಕಕೊನಿಮ/ಆಯುಕ್ತರು/ನಿಜ್ಯೋ/ ಭದ್ರಾವತಿ/2007–08/1120, ದಿನಾಂಕ 18–2–2008.
3. ಆಯುಕ್ತರು, ಕಕೊನಿಮ, ಬೆಂಗಳೂರು ಇವರ ಪತ್ರ ಸಂಖ್ಯೆ: ಕಕೊನಿಮ/ಆಯುಕ್ತರು/ತಾಶಾ/ ನಿಜ್ಯೋ–2/ ವರ್ಕ್‌ಸ್ಲಿಪ್/2007–08/78, ದಿನಾಂಕ 19–4–2008, 6–5–2008.

**ಪ್ರಸ್ತಾವನೆ :**

ಮೇಲೆ ಉಲ್ಲೇಖ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಭದ್ರಾವತಿ ನಗರದ ವ್ಯಾಪ್ತಿಯಲ್ಲಿ ಬರುವ ಕೊಳಚೆ ಪ್ರದೇಶಗಳಲ್ಲಿನ ಕೊಳಚೆ ನಿವಾಸಿಗಳಿಗೆ ಮೂಲಭೂತ ಸೌಲಭ್ಯಗಳನ್ನು ಒದಗಿಸಲು ನಿರ್ಮಲಜ್ಯೋತಿ ಯೋಜನೆಯಡಿಯಲ್ಲಿ ರೂ. 358.88 ಲಕ್ಷಗಳ ಮೂಲ ಅಂದಾಜು ಪಟ್ಟಿಯಂತೆ ಕಾಮಗಾರಿಗಳನ್ನು ನಿರ್ವಹಿಸಲು ಟೆಂಡರ್ ಕರೆಯಲಾಗಿ, ಶೇಕಡ 12.15 ರಷ್ಟು ಹೆಚ್ಚಿನ ದರದಲ್ಲಿ (ಟೆಂಡರ್‌ನಲ್ಲಿ ಅತಿಕಡಿಮೆ ದರ) ಕಾಮಗಾರಿಗಳ ಅಂದಾಜು ಮಟ್ಟಿಗೆ, ಟೆಂಡರ್ ನಿಯಮದಂತೆ, ಸಕ್ರಮ ಪ್ರಾಧಿಕಾರದಿಂದ ತಾಂತ್ರಿಕ ಹಾಗೂ ಆಡಳಿತಾತ್ಮಕ ಅನುಮೋದನೆಯನ್ನು 402,49 ಲಕ್ಷ ರೂ.ಗಳಿಗೆ ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿಯ ಟೆಂಡರ್ ಅಧಿಸೂಚನೆ ದಿನಾಂಕ 14–3–2006ರಲ್ಲಿ ಟೆಂಡರ್ ಷೆಡ್ಯುಲ್‌ಗಳ ಷರತ್ತುಗಳಂತೆ ಕಾಮಗಾರಿಗಳನ್ನು ನಿರ್ವಹಿಸಲು ಗುತ್ತಿಗೆದಾರರಾದ ಶ್ರೀ ಹೆಚ್. ರಮೇಶ್ ಶೆಣೈ ಇವರಿಗೆ ನೀಡಲು ಸರ್ಕಾರ ಮಂಜೂರಾತಿ ನೀಡಿರುತ್ತದೆ.

ಮೇಲೆ ಕ್ರಮ ಸಂಖ್ಯೆ (2 ಮತ್ತು 3)ರಲ್ಲಿ ಓದಲಾದ ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ ಇವರ ಪ್ರಸ್ತಾವನೆಯಲ್ಲಿ ನಿರ್ಮಲ ಜ್ಯೋತಿ 2ನೇ ಹಂತದಲ್ಲಿ ಭದ್ರಾವತಿ ನಗರದ 15 ಕೊಳಚೆ ಪ್ರದೇಶಗಳಲ್ಲಿ ಸಮಗ್ರವಾಗಿ

ಅಭಿವೃದ್ಧಿ ಕಾಮಗಾರಿಗಳನ್ನು ರೂ. 402.49 ಲಕ್ಷಗಳಲ್ಲಿ ತೆಗೆದುಕೊಳ್ಳಲಾಗಿದ್ದು, ಕಾಮಗಾರಿಯು ಪೂರ್ಣಗೊಳ್ಳುವ ಹಂತದಲ್ಲಿದ್ದು, ಪ್ರಾಯೋಜನಾ ವ್ಯವಸ್ಥಾಪಕರು (ತಾಂ) ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ದಾವಣಗೆರೆ ವಿಭಾಗದವರು ಕಾಮಗಾರಿಯು ಪ್ರಗತಿಯಲ್ಲಿರುವಂತೆ ಟೆಂಡರ್ ಷೆಡ್ಯೂಲ್–ಬಿ ನಲ್ಲಿರುವ ಕೆಲವು ಕಾಮಗಾರಿಗಳ ಪರಿಮಾಣಗಳಲ್ಲಿ ಅಗತ್ಯಕ್ಕೆ ಮತ್ತು ಸ್ಥಳಕ್ಕನುಗುಣವಾಗಿ ಸಿ.ಸಿ. ನೆಲಹಾಸು, ಸಿ.ಸಿ. ಬ್ಲಾಕ್ ಚರಂಡಿ ಹಾಗೂ ಮಣ್ಣುಸಾಗಣೆ ನಿರ್ಮಾಣದಲ್ಲಿ ಹೆಚ್ಚುವರಿ ಪರಿಮಾಣಗಳನ್ನು ನಿರ್ವಹಿಸಬೇಕಾಗಿದ್ದರಿಂದ ಪ್ರಸ್ತಾಪಿತ ಹೆಚ್ಚುವರಿ ಕಾಮಗಾರಿಗಳನ್ನು ಇಲ್ಲಿನ ಜನಪ್ರತಿನಿಧಿಗಳು ಹಾಗೂ ಕೊಳಚೆ ನಿವಾಸಿಗಳ ಒತ್ತಾಯದ ಹಿನ್ನೆಲೆಯಲ್ಲಿ ದಿನಾಂಕ 19–12–2007ರಂದು ತಾಂತ್ರಿಕ ನಿರ್ದೇಶಕರು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ಬೆಂಗಳೂರು ರವರು ಪ್ರಸ್ತಾಪಿತ ಕಾಮಗಾರಿಗಳ ಸ್ಥಳದ ಅಗತ್ಯತೆಗಳನುಗುಣವಾಗಿ ಕಾಮಗಾರಿಗಳಲ್ಲಿ ಹೆಚ್ಚುವರಿ ಮತ್ತು ಕಡಿಮೆ ಪರಿಮಾಣಗಳು ಅಥವಾ ಬದಲಾವಣೆಗಳು ಆಗಿರುವ ಸ್ಥಳಪರಿಶೀಲನೆ ವರದಿ ಮಾಡಿರುತ್ತಾರೆ. ಅದರಂತೆ ಸದರಿ ಕಾಮಗಾರಿಗಳ ತಯಾರಿಸಿರುವ ವರ್ಕ್‌ಸ್ಲಿಪ್ ಮೊತ್ತವು ರೂ. 91,55,646.00/– ರೂಗಳಾಗಿದ್ದು ಇದು ಮಂಜೂರಾದ ಅಂದಾಜು ಮೊತ್ತ ರೂ. 358.88 ಲಕ್ಷಗಳಿಗೆ ಹೋಲಿಸಿದಾಗ ಶೇಕಡ 25.55ರಷ್ಟು ಹೆಚ್ಚಾಗಿರುತ್ತದೆ.

ಈ ಹೆಚ್ಚುವರಿ ಮೊತ್ತವನ್ನು ಉಳಿತಾಯವಾಗಲಿರುವ ರೂ. 93.55 ಲಕ್ಷಗಳಲ್ಲಿ ಭರಿಸಲಾಗುವುದೆಂದು ಹಾಗೂ ಈ ಯೋಜನೆ ಪೂರ್ಣಗೊಂಡಾಗ ಗುತ್ತಿಗೆದಾರರಿಗೆ ವಹಿಸಿರುವ ಈಗಾಗಲೇ ಅನುಮೋದನೆಯಾಗಿರುವ ಟೆಂಡರ್ ಮೊತ್ತ ರೂ. 402.49 ಲಕ್ಷಗಳಿಗಿಂತ ಹೆಚ್ಚುವರಿಯಾಗದಂತೆ ನೋಡಿಕೊಳ್ಳಲಾಗುವುದರಿಂದ ಮಂಡಳಿಗೆ ಯಾವುದೇ ಹೆಚ್ಚಿನ ಆರ್ಥಿಕ ಹೊರೆಯಾಗುವುದಿಲ್ಲವೆಂದು ಪ್ರಾಯೋಜನಾ ವ್ಯವಸ್ಥಾಪಕರು (ತಾಂ) ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ದಾವಣಗೆರೆ ವಿಭಾಗದವರು ತುಲಾನಾತ್ಮಕ ಪಟ್ಟಿಯೊಂದಿಗೆ ವರದಿ ಮಾಡಿರುತ್ತಾರೆ. ಸದರಿ ವರ್ಕ್‌ಸ್ಲಿಪ್‌ನ್ನು ದಿನಾಂಕ 18–1–2008ರಂದು ನಡೆದ ಮಂಡಳಿ ಸಭೆಯ ಹೆಚ್ಚುವರಿ ವಿಷಯ ಸಂಖ್ಯೆ 4ರಲ್ಲಿ ಪ್ರಸ್ತಾವನೆ ಅನುಮೋದಿಸಿ, ಪ್ರಸ್ತಾವನೆಯನ್ನು ಸರ್ಕಾರದ ಅನುಮೋದನೆಗಾಗಿ ಸಲ್ಲಿಸಿರುತ್ತಾರೆ. ವರ್ಕ್‌ಸ್ಲಿಪ್‌ನ ಮೊತ್ತವಾದ ರೂ. 91,55,646.00 ರೂಗಳು ಮೂಲ ಅಂದಾಜು ವೆಚ್ಚವು ಮೊತ್ತವಾದ ರೂ. 358.88 ಲಕ್ಷ ರೂಗಳಿಗಿಂತ ಕಡಿಮೆ ಇರುವುದರಿಂದ ಮತ್ತು ಈ ಹೆಚ್ಚುವರಿ ಅಧಿಕಾರವು ಈ ಕಛೇರಿಗೆ ಬರುವುದರಿಂದ ಮಂಜೂರಾತಿ ನೀಡಲು ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 11 ಕೊಮಂಲೆ 2008, ಬೆಂಗಳೂರು, ದಿನಾಂಕ: 18ನೇ ಜುಲೈ 2008.**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ ಭದ್ರಾವತಿ ನಗರದಲ್ಲಿ ನಿರ್ಮಲ್ ಜ್ಯೋತಿ ಯೋಜನೆಯಡಿಯಲ್ಲಿ ರೂ. 402.49 ಲಕ್ಷಗಳ ಟೆಂಡರ್ ಪಟ್ಟಿಯ ಕಾಮಗಾರಿಗಳಿಗೆ ಮಂಜೂರಾತಿ ನೀಡಿದ್ದು, ಪ್ರಸ್ತಾಪಿತ ಕಾಮಗಾರಿಗಳಲ್ಲಿ ಹೆಚ್ಚುವರಿ ಪರಿಮಾಣಗಳ ವರ್ಕ್‌ಸ್ಲಿಪ್‌ನ್ನು ಟೆಂಡರ್ ಗುತ್ತಿಗೆ ಕರಾರಿನ ಕಂಡಿಕೆ 3,12,3ರನ್ವಯ (ಪಿ.ಡಬ್ಲ್ಯು.ಜಿ. 13ಎ) ಸ್ಥಳದ ಅಗತ್ಯತೆ ಮತ್ತು ಅವಶ್ಯಕತೆಗನುಗುಣವಾಗಿ ಕಾಮಗಾರಿಗಳಲ್ಲಿ ಹೆಚ್ಚುವರಿ ಪರಿಮಾಣಗಳು, ಕಡಿಮೆ ಪರಿಮಾಣಗಳು ಅಥವಾ ಬದಲಾವಣೆ ಅಂಶಗಳನ್ನು ಕೈಗೊಳ್ಳಲು ಅವಕಾಶವಿರುವುದರಿಂದ, ಈ ಕಾಮಗಾರಿಯಲ್ಲಿ ಉಳಿತಾಯವಾಗಲಿರುವ ಹಣದಿಂದ ಕಾಮಗಾರಿಗಳನ್ನು ಕೈಗೊಳ್ಳಲು ಉದ್ದೇಶಿಸಲಾಗಿರುವುದರಿಂದ, ಕಾಮಗಾರಿ ಇತರೆ ಬಾಬ್ತುಗಳಿಂದ ಪೂರ್ಣಗೊಂಡಾಗ ಒಟ್ಟಾರೆ ಗುತ್ತಿಗೆದಾರರಿಗೆ ವಹಿಸಿರುವ ಮೊತ್ತಕ್ಕಿಂತ ಯಾವುದೇ ಆರ್ಥಿಕ ಹೆಚ್ಚುವರಿಯಾಗದಂತೆ ನಿರ್ವಹಿಸಿರುವ ಕಾಮಗಾರಿಗೆ ತಯಾರಿಸಿರುವ ವರ್ಕ್‌ಸ್ಲಿಪ್‌ನ ಮೊತ್ತ ರೂ. 91,55,646.00 ಗಳಾಗಿದ್ದು, ಇದು ಮೂಲ ಅಂದಾಜು ಮೊತ್ತಕ್ಕೆ ಹೋಲಿಸಿದಾಗ ಶೇ. 25.55ರಷ್ಟು ಹೆಚ್ಚಿದ್ದು, ಮಂಡಳಿಯ ಅಧಿಕಾರ ವ್ಯಾಪ್ತಿ ಮೀರಿರುವುದರಿಂದ ಹಾಗೂ ಇದು ಒಟ್ಟಾರೆ ಯೋಜನಾ ಮೊತ್ತಕ್ಕು ಮೀರದೇ ಇರುವುದರಿಂದ ಹಾಗೂ ದಿನಾಂಕ 19–10–2006ರ ಆದೇಶದಲ್ಲಿ ವಿಧಿಸಿರುವ ಷರತ್ತುಗಳನ್ನು ಕಟ್ಟುನಿಟ್ಟಾಗಿ ಪಾಲಿಸುವ ಷರತ್ತಿಗೆ ಒಳಪಟ್ಟು ರೂ. 91,55,646.00ಗಳ ವರ್ಕ್‌ಸ್ಲಿಪ್‌ಗೆ ಸರ್ಕಾರ ಮಂಜೂರಾತಿ ನೀಡಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 01 ಟಿಎಫ್‌ಪಿ 96, ದಿನಾಂಕ 10–7–1996ರಲ್ಲಿ ಆಡಳಿತ ಇಲಾಖೆಯ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದಂತೆ ಹಾಗೂ ಆಂತರಿಕ ಆರ್ಥಿಕ ಸಲಹೆಗಾರ ಹಿಂಬರಹ ಸಂಖ್ಯೆ ವನಇ 99 ಅಂಆಸ 2008, ದಿನಾಂಕ 3–6–2008ರಲ್ಲಿ ನೀಡಿರುವ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1128

**ಜಿ.ಆರ್. ನಾಗರಾಜ**

ಪೀಠಾಧಿಕಾರಿ–4, ವಸತಿ ಇಲಾಖೆ